# ಉಕ್ರ್ಯ ಇಸ್ಲಾಮಿಗವೇ ಪುರಾವೆಗಳ ಬೆಳಕಿನಲ್ಲಿ

–ನಿಸಾರ್ ಮುಕ್ಕಚ್ಚೇರಿ

**ಖುರ್‌ಆನನ್ನು ರೋಗ ಶಮನಕ್ಕಾಗಿ ಉಪಯೋಗಿಸಬಹುದೆಂದು ಅಲ್ಲಾಹನೇ ವ್ಯಕ್ತ ಪಡಿಸಿದ್ದಾನೆ.**

**وَنُنَزِّلُ مِنَ القرآن مَا هُوَ شِفَآءٌ وَرَحْمَةٌ لِّلْمُؤْمِنِينَ**

**"ಸತ್ಯವಿಶ್ವಾಸಿಗಳಿಗೆ ಖುರ್‌ಆನ್ ಸನ್ಮಾರ್ಗದರ್ಶಿಯೂ ರೋಗ ಶಾಂತಿಯೂ ಆಗಿದೆ."(ಅಲ್ ಇಸ್ರಾಅ್:82)**

**ಈ ಸೂಕ್ತವನ್ನು ವಿವರಿಸಿ ಇಮಾಂ ರಾಝಿ ರಳಿಯಲ್ಲಾಹು ಅನ್ಹು ರವರು ಬರೆಯುತ್ತಾರೆ:**

وَاعْلَمْ أَنَّ الْقُرْآنَ شِفَاءٌ مِنَ الْأَمْرَاضِ الرُّوحَانِيَّةِ، وَشِفَاءٌ أَيْضًا مِنَ الْأَمْرَاضِ الْجُسْمَانِيَّةِ

“ನಿಶ್ಚಯವಾಗಿಯೂ ಖುರ್‌ಆನ್ ಶಾರೀರಿಕವೂ ಆತ್ಮೀಯವೂ ಆದ ರೋಗಗಳಿಗೆ ಶಮನವಾಗಿದೆ.”(ತಫ್ಸೀರು ರಾಝೀ)

ಇಮಾಂ ಖುರ್ತುಬಿ ರಳಿಯಲ್ಲಾಹು ಅನ್ಹು ರವರು ಬರೆಯುತ್ತಾರೆ:

“ಖುರ್‌ಆನ್ ಶಾರೀರಿಕ ರೋಗಗಳಿಗೆ ಶಮನವಾಗುವುದು. ಅದರಿಂದ ಮಂತ್ರಿಸುವುದರಿಂದಲೂ ಬರೆದು ಕೊಡುವ ಮೂಲಕವೂ ಆಗಿದೆ.”

(ಖುರ್ತುಬಿ)

## ಹದೀಸ್:

ಅಂರ್ರ್ ಬಿನು ಶುಹೈಬ್ ರಳಿಯಲ್ಲಾಹು ಅನ್ಹು ರವರು ತನ್ನ ತಂದೆಯಿಂದ ನಿವೇದಿಸುತ್ತಾರೆ:

، عن أبيه ، عن جده - رضي الله عمرو بن شعيب وعن إذا فزع : عنهم - أن رسول الله - صلى الله عليه وسلم - قال أحدكم في النوم فليقل : أعوذ بكلمات الله التامات من غضبه وشر عباده ومن همزات الشياطين وأن يحضرون وعقابه يعلمها من بلغ من عبد الله بن عمرو فإنها لن تضره ، وكان ولده ومن لم يبلغ منهم كتبها في صك ثم علقها في عنقه

"ನಿದ್ದೆಯಲ್ಲಿ ಉಂಟಾಗುವ ಭಯದಿಂದ ಮೋಚನೆ ಲಭಿಸಲು ಅವೂದು ಬಿಲ್ಲಾಹಿ...ಎಂದು ಪ್ರಾರಂಭಿಸಲ್ಪಡುವ ಮಂತ್ರವನ್ನು ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಕಲಿಸಿ ಕೊಟ್ಟಿದ್ದರು.ಸ್ವಹಾಬಿ ಪ್ರಮುಖರಾದ ಅಬ್ದುಲ್ಲಾಹಿ ಬಿನು ಅಂರ್ರ್ ರಳಿಯಲ್ಲಾಹು ಅನ್ಹು ರವರು ತನ್ನ ಪ್ರಾಯ ಪೂರ್ತಿಯಾದ ತನ್ನ ಮಕ್ಕಳಿಗೆ ಇದನ್ನು ಕಲಿಸಿ ಕೊಡುತ್ತಿದ್ಧರು ಸಣ್ಣ ಮಕ್ಕಳಿಗೆ ಇದು ಒಂದು

ಕಾಗದದಲ್ಲಿ ಬರೆದು ಕುತ್ತಿಗೆಗೆ ಕಟ್ಟಿ ಕೊಡುತ್ತಿದ್ಧರು.ಈ ಹದೀಸ್ ಹಸನು ಗರೀಬ್ ಆಗಿದೆ ಎಂದು ಇಮಾಂ ತಿರ್ಮುದ್ಸಿ ರಳಿಯಲ್ಲಾಹು ಅನ್ಹು ಪ್ರಸ್ತಾವಿಸಿದ್ದಾರೆ. (ತಿರ್ಮುದ್ಸಿ)

ಈ ಹದೀಸ್ ವಿಶದಿಗರಿಸಿ ಅಲ್ಲಾಮ ಅಲೀಯ್ಯುಲ್ ಖಾರಿ ರವರು ಬರೆಯುತ್ತಾರೆ:

"ಅಲ್ಲಾಹುವಿನ ನಾಮಗಳು ಬರೆದ ಉರ್ಕುಗಳು ಕಟ್ಟಬಹುದು ಎಂಬುದಕ್ಕೆ ಈ ಹದೀಸ್ ರೇಖೆಯಾಗಿದೆ.ಇಮಾಂ ಅಹ್ಮದ್ ರಳಿಯಲ್ಲಾಹು ಅನ್ಹು,ತುರ್ಮುದ್ಸಿ ರಳಿಯಲ್ಲಾಹು ಅನ್ಹು ಎಂಬವರು ಈ ಹದೀಸನ್ನು ನಿವೇದಿಸಿದ್ಧಾರೆ."(ಮಿರ್ಕಾತುಲ್ ಮಫಾತೀಹ್)

ಅಬೂ ದಾವೂದ್‌ನ ಶರಹ್‌ನಲ್ಲಿ ಬರೆಯುತ್ತಾರೆ: “ಸಣ್ಣ ಮಕ್ಕಳಿಗೆ ಉರ್ಕು ಕಟ್ಟಿ ಕೊಡಬಹುದೆಂಬುದಕ್ಕೆ ಈ ಹದೀಸ್ ಪುರಾವೆಯಾಗಿದೆ.”(ಔನುಲ್ ಮಅ್‌ಬೂದ್)

ಇಮಾಂ ನವವಿ ರಳಿಯಲ್ಲಾಹು ಅನ್ಹು ಹೇಳುತ್ತಾರೆ: ಪ್ರಬಲವಾದ ಪರಂಪರೆಯೊಂದಿಗೆ ಇಮಾಂ ಬೈಹಖಿ ರಳಿಯಲ್ಲಾಹು ಅನ್ಹು ಸಈದು ಬ್ನುಲ್ ಮುಸಯ್ಯಬ್ ರಳಿಯಲ್ಲಾಹು ಅನ್ಹು ರವರಿಂದ ಉದ್ಧರಿಸಿದ್ದಾರೆ.ಅವರು ಖುರ್‌ಆನ್ ಬರೆದು ಕಟ್ಟಲು ನಿರ್ದೇಶಿಸಿದ್ದರು.ಅದಕ್ಕೆ ವಿರೋಧವಿಲ್ಲವೆಂದು ಪ್ರಸ್ತಾವಿಸಿದರು.”(ಶರಹುಲ್ ಮುಹದ್ದಬ್)

## ನೂತನವಾದಿಗಳಿಗೆ ಖಂಡನೆ:

ಕೆಲವೊಂದು ಹದೀಸ್‌ಗಳನ್ನು ಹೇಳುತ್ತಾ ನೂತನವಾದಿಗಳು ಸುನ್ನಿಗಳ ಮೇಲೆ ವಾಚಿಸುವುದುಂಟು ಯಾದಾರ್ಥದಲ್ಲಿ ಅಂತಹ ಹದೀಸ್ ಗಳನ್ನು ಸ್ವಚ್ಚರಿತರಾದ ಇಮಾಮರುಗಳು ಕಂಡಿಲ್ಲವೇ ಅವರು ಅದರ ಕುರಿತು ಹೇಳಿದ್ದೇನು ನೋಡುವ:

ಇಮಾಂ ಬೈಹಖಿ ರಳಿಯಲ್ಲಾಹು ಅನ್ಹು ರವರು ಹೇಳುತ್ತಾರೆ: ‘‘ರೋಗ ಶಮನವೂ ಸೌಖ್ಯವೂ ಲಭಿಸುವುದು ಉರ್ಕು ನಿಂದಾಗಿದೆ. ಎಂಬ ಜಾಹಿಲಿಯ್ಯತ್ ಗೆ ಇದ್ದ ವಿಶ್ವಾಸ ಪ್ರಕಾರ ಉರ್ಕು ಕಟ್ಟುವುದಕ್ಕಾಗಿದೆ ವಿರೋಧ ವಿರುವುದು. ಅದೇ ಸಮಯ ತೊಂದರೆಗಳು ನಿಗಿಸುವುದೂ ಸೌಖ್ಯ ಲಭಿಸುವಂತದ್ದು ಅಲ್ಲಾಹು ಮಾತ್ರವೆಂಬ ವಿಶ್ವಾಸದೊಂದಿಗೆ ಬರ್ಕತ್ ಉದ್ದೇಶಿಸಿ ದಿಕ್ರ್ ಬರೆದು ಕಟ್ಟುವುದಕ್ಕೆ ವಿರೋಧವಿಲ್ಲ.’’(ಶರಹುಲ್ ಮುಹದ್ದಬ್)

ಇಮಾಂ ಖುರ್ತುಬಿ ರಳಿಯಲ್ಲಾಹು ಅನ್ಹು ರವರು ಬರೆಯುತ್ತಾರೆ:

“ಈ ಮೇಲಿನ ಎಚ್ಚರಿಕೆಗಳು ಜಾಹಿಲಿಯ್ಯ ಕಾಲದ ಪ್ರವರ್ತನದ ಕುರಿತಾಗಿದೆ. ಕಾರಣ ಅವರು ಆ ತಮಯಿಮ್ ನಿಂದ ಭಾವಿಸಿದರು ಅ ತಮಯಿಮ್ ಸ್ವಯಂ ತಮ್ಮ ಮುಸೀಬತ್‌ಗಳನ್ನು ನೀಗಿಸುತ್ತದೆ ಎಂದು. ಅಲ್ಲಾಹನಲ್ಲದೇ ಮುಸೀಬತ್ ಗಳನ್ನು ನೀಗಿಸುವುದಿಲ್ಲ ಎಂಬ ವಿಶ್ವಾಸವಾಗಿದ್ದರೆ ಅದು ಆರೋಗ್ಯಕರವಾದದ್ದು ಆಗಿದೆ. ರಸೂಲ್ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರು ಜಾಹಿಲಿಯ್ಯ ಪ್ರವರ್ತನವನ್ನಾಗಿದೆ ವಿರೋಧಿಸಿದ್ದು.”(ಖುರ್ತುಬಿ)

ನೂತನವಾದಿಗಳು ಅಂಗೀಕರಿಸುವ ಶೌಕಾನಿ ಬರೆಯುತ್ತಾರೆ:“ಈ ಮೂರನ್ನು ಶಿರ್ಕ್‌ನಲ್ಲಿ

ಒಳಪಡಿಸಿದ್ದು ಅವುಗಳು ಸ್ವಯಂ ಫಲಿಸುತ್ತದೆ ಎಂಬ ವಿಶ್ವಾಸದ ಕಾರಣದಿಂದಾಗಿದೆ.’’(ನಯ್‌ಲುಲ್ ಔತ್ವಾರ್)